ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ವೇತನ ನಿಗದಿ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

1326 (1506) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರದ ಇಲಾಖೆಗಳಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಯಾವ ವೇತನ ಶ್ರೇಣಿ ನೀಡಲಾಗುತ್ತಿದೆ ;

(ಆ) ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಅಭ್ಯರ್ಥಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ ನೀಡಲಾಗುತ್ತದೆಯೇ; ಪೊಲೀಸ್ ಇಲಾಖೆಯ ಎಫ್ಎಸ್ಎಲ್ ವಿಭಾಗದಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಸರ್ಕಾರದ ಇಲಾಖೆಗಳಲ್ಲಿ ವೇತನ ಶ್ರೇಣಿಯನ್ನು ನಿಗಧಿಪಡಿಸುವಾಗ ವಿದ್ಯಾರ್ಹತೆಯನ್ನು ಮಾನದಂಡವಾಗಿ ಪರಿಗಣಿಸಲಾಗುತ್ತದೆಯೇ; ಇಲ್ಲವಾದಲ್ಲಿ, ಯಾವ ಆಧಾರದಲ್ಲಿ ವೇತನ ಶ್ರೇಣಿಯನ್ನು ನಿಗದಿಪಡಿಸಲಾಗುತ್ತಿದೆ ;

(ಈ) ಪೊಲೀಸ್ ಇಲಾಖೆಯ ಎಫ್ಎಸ್ಎಲ್ ವಿಭಾಗದಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ ನಿಗದಿಪಡಿಸಿದ್ದು ಅದೇ ರೀತಿಯಾಗಿ ಸರ್ಕಾರದ ಇತರೆ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ ನಿಗದಿಪಡಿಸುವ ಕುರಿತು ಸರ್ಕಾರದ ನಿಲುವೇನು ?